## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : **410** |
| ಸದಸ್ಯರ ಹೆಸರು | : ಶ್ರೀ ಆರ್.ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : 18.07.2019 |
| ಉತ್ತರಿಸುವ ಸಚಿವರು | : ಮುಖ್ಯಮಂತ್ರಿ |

*****

| | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಸೋಲಾರ್‌ನಿಂದ ರೈತರ ಜಮೀನುಗಳಲ್ಲಿ ಮತ್ತು ಮೇಲ್ಛಾವಣಿಗಳ ಮೇಲೆ ವಿದ್ಯುತ್ ಉತ್ಪಾದನೆ ಮಾಡುವ ಯೋಜನೆಯು ಸರಿಯಾಗಿ ಪ್ರಚಾರವಾಗದೆ ನಿರೀಕ್ಷಿತ ಮಟ್ಟದಲ್ಲಿ ರೈತರಿಗೆ ಉಪಯೋಗವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಭೂಮಾಲೀಕತ್ವ ರೈತರ ಯೋಜನೆ: ರೈತರ ಭೂಮಿಯನ್ನು ಬಳಸಿ ವಿಕೇಂದ್ರಿಕೃತ ವಿದ್ಯುತ್ ಉತ್ಪಾದನೆಯನ್ನು ಉತ್ತೇಜಿಸುವ ಯೋಜನೆಯನ್ನು ಸೌರ ನೀತಿ 2014–21ರನ್ವಯ ಗ್ರಾಮಾಂತರ ಪ್ರದೇಶಗಳಲ್ಲಿ ವಿಕೇಂದ್ರಿಕೃತ ಸೌರ ಘಟಕಗಳನ್ನು ಸ್ಥಾಪಿಸುವ ಉದ್ದೇಶದಿಂದ ವಿದ್ಯುತ್ ಸರಬರಾಜು ಕಂಪನಿಗಳ ಖರೀದಿಗಾಗಿ ಭೂಮಾಲೀಕ ರೈತರಿಗೆ 314 ಮೆ.ವ್ಯಾ ಸಾಮರ್ಥ್ಯದ ಯೋಜನೆಗಳನ್ನು ಹಂಚಿಕೆ ಮಾಡಲು ದಿನ ಪತ್ರಿಕೆಗಳಲ್ಲಿ ಪ್ರಚಾರ ನೀಡಿ ಆನ್‌ಲೈನ್ ಮುಖಾಂತರ ಅರ್ಜಿಗಳನ್ನು ಎನ್‌ಐಸಿ ಮತ್ತು ರಾಜ್ಯ ಡಾಟಾ ಸೆಂಟರ್ ಮುಖೇನ ಪಡೆಯಲಾಗಿದ್ದು ಅರ್ಹ ಅರ್ಜಿದಾರರಿಗೆ ಹಂಚಿಕೆ ಪತ್ರವನ್ನು ನೀಡಲಾಗಿರುತ್ತದೆ. ಈ ವರ್ಗದಡಿ 296 ಮೆ.ವ್ಯಾ ನಷ್ಟು ಸಾಮರ್ಥ್ಯದ 147 ಸೌರ ಘಟಕಗಳು ಅನುಷ್ಠಾನಗೊಂಡಿರುತ್ತವೆ. ಒಂದು ಮೆ.ವ್ಯಾ ಸಾಮರ್ಥ್ಯದ ಒಂದು ಯೋಜನೆಯನ್ನು ರದ್ದುಗೊಳಿಸಲಾಗಿದ್ದು ಇನ್ನಿತರ ಘಟಕಗಳ ಅನುಷ್ಠಾನವು ಪ್ರಗತಿಯಲ್ಲಿರುತ್ತದೆ.<br><br>ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್ ಯೋಜನೆ: ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ಪರ್ಯಾಯವಾಗಿ ವಿದ್ಯುತ್ ಪೂರೈಸಲು ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್‌ಗಳನ್ನು ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರದ ಎಂ.ಎನ್.ಆರ್.ಇ ಆದೇಶಗಳಂತೆ 5 ಹೆಚ್.ಪಿ. ಸಾಮರ್ಥ್ಯದ ಸೋಲಾರ್ ಪಂಪ್‌ಸೆಟ್‌ಗಳಿಗೆ ಆನ್‌ಲೈನ್ ಮೂಲಕ ಅರ್ಜಿಗಳನ್ನು ಸ್ವೀಕರಿಸಿ ಸೌರ ಪಂಪ್‌ಸೆಟ್‌ಗಳನ್ನು ಅಳವಡಿಸಿಕೊಡಲಾಗುತ್ತಿದೆ. ಸದರಿ ಯೋಜನೆಯ ಕುರಿತು ದಿನಪತ್ರಿಕೆಗಳಲ್ಲಿ ಜಾಹಿರಾತುಗಳನ್ನು ಹೊರಡಿಸುವ ಮೂಲಕ ಪ್ರಚಾರವನ್ನು ಕೈಗೊಳ್ಳಲಾಗಿದೆ. ಜೂನ್–2019ರ ಅಂತ್ಯಕ್ಕೆ ಸದರಿ ಯೋಜನೆಯಡಿ, 3142 ಸಂಖ್ಯೆಯ ಸೌರ ನೀರಾವರಿ ಪಂಪ್‌ಸೆಟ್‌ಗಳನ್ನು ಅಳವಡಿಕೊಡಲಾಗಿದೆ. |
| ಆ | ಹಾಗಿದ್ದಲ್ಲಿ, ಸೋಲಾರ್‌ನಿಂದ ರೈತರ ಜಮೀನುಗಳಲ್ಲಿ ಮತ್ತು ಮೇಲ್ಛಾವಣಿಗಳ ಮೇಲೆ ವಿದ್ಯುತ್ ಉತ್ಪಾದನೆ ಮಾಡುವ ಯೋಜನೆಯು ಯಾವಾಗಿನಿಂದ ಜಾರಿಗೆ ಬಂದಿದೆ; ಈ ಯೋಜನೆಯಲ್ಲಿ ರೈತರಿಗೆ ಸರ್ಕಾರವು ಯಾವ ಯಾವ ಸೌಲಭ್ಯಗಳನ್ನು ಒದಗಿಸುತ್ತದೆ;(ಯೋಜನೆಯ ಸಂಪೂರ್ಣ ವಿವರವನ್ನು ಒದಗಿಸುವುದು) | ಭೂಮಾಲೀಕತ್ವ ರೈತರ ಯೋಜನೆಯಡಿ ಸೌರ ಘಟಕಗಳನ್ನು ಸ್ಥಾಪಿಸಲು ಆನ್‌ಲೈನ್ ಮುಖಾಂತರ ಅರ್ಜಿಗಳನ್ನು ದಿನಾಂಕ: 09.10.2014 ಆಹ್ವಾನಿಸಿ ಯಶಸ್ವಿ ಭೂ–ಮಾಲೀಕರಿಗೆ 2015 ರ ಮಾರ್ಚ್ ತಿಂಗಳಲ್ಲಿ ಹಂಚಿಕೆ ಪತ್ರಗಳನ್ನು ನೀಡಲಾಗಿದೆ.<br>**<u>ಸೌರ ಯೋಜನೆಗೆ ನೀಡುವ ಸೌಲಭ್ಯಗಳು:</u>**<br>**ಅ) ರಾಜ್ಯ ಸರ್ಕಾರದ ಸೌಲಭ್ಯಗಳು:**<br>ಕರ್ನಾಟಕ ರಾಜ್ಯ ಸರ್ಕಾರದಿಂದ ಸೌರ ನೀತಿಯ ಪ್ರಕಾರ ಗ್ರಿಡ್ ಸಂಪರ್ಕಿತ ಹೆಚ್ಚಿನ (ಮೆ.ವ್ಯಾ.) ಸಾಮರ್ಥ್ಯದ ಖಾಸಗಿ ವಲಯದ ಸ್ಥಾವರಗಳಿಗೆ ಈ ಕೆಳಗಿನ ಪ್ರೋತ್ಸಾಹಗಳನ್ನು ನೀಡಲು ಕ್ರಮಗಳನ್ನು ಕೈಗೊಳ್ಳಲಾಗಿದೆ:<br>1. ಕರ್ನಾಟಕ ಕೈಗಾರಿಕಾ ನೀತಿಯಡಿಯಲ್ಲಿ ಸಿಗುವ ಎಲ್ಲಾ ವಿನಾಯಿತಿಗಳನ್ನು ಸೌರ ಯೋಜನೆ ಅಭಿವೃದ್ಧಿದಾರರು ಪಡೆಯಲು ಅವಕಾಶವಿದೆ.<br>• ಸಾಲದ ಪತ್ರಗಳ ಮತ್ತು ಕೈಗಾರಿಕಾ ನಿವೇಶನ ಮತ್ತು ಮಳಿಗೆ ಖರೀದಿ ಪತ್ರಗಳ ನೊಂದಣಿ ಶುಲ್ಕ ಮತ್ತು ಮುದ್ರಾಂಕ ಶುಲ್ಕಗಳಿಂದ ವಿನಾಯಿತಿ ನೀಡಲಾಗಿದೆ.<br>• ಸೌರ ಯೋಜನೆಗಳನ್ನು ಸ್ಥಾಪಿಸಲು ಭೂ ಸುಧಾರಣೆ ಕಾಯ್ದೆ 109 ರನ್ವಯ ಅನುಮತಿ ಹೊಂದಿದ ಭೂಮಿಗೆ ಪರಿಭಾವಿತ ಭೂ–ಪರಿವರ್ತನೆ ಸೌಲಭ್ಯವನ್ನು ಒದಗಿಸಲಾಗುತ್ತಿದೆ. ಪರಿಭಾವಿತ ಭೂ ಪರಿವರ್ತನೆಯ ಶುಲ್ಕದಿಂದ ವಿನಾಯಿತಿ ನೀಡಲಾಗಿದೆ. |

...2)

| | | |
|---|---|---|
| | | 2. ಸೌರ ವಿದ್ಯುತ್ ಘಟಕಗಳಿಗೆ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ನಿರಾಕ್ಷೇಪಣ ಪತ್ರವನ್ನು ಪಡೆಯುವುದರಿಂದ ವಿನಾಯಿತಿ ನೀಡಲಾಗಿದೆ.<br>3. ಜಿ.ಎಸ್.ಟಿ ಜಾರಿಗೆ ಬರುವ ಮೊದಲು Inverter and solar PV panel ಗಳ ಮೇಲಿನ VAT ಸುಂಕದಿಂದ ವಿನಾಯಿತಿ ನೀಡಲಾಗುತ್ತಿತ್ತು ಮತ್ತು ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 5 ಸಿಇಟಿ 2015, ದಿನಾಂಕ 21/09/2015 ರನ್ವಯ ನವೀಕರಿಸಬಹುದಾದ ಇಂಧನ ಯೋಜನೆಗಳ ಯಂತ್ರೋಪಕರಣಗಳನ್ನು ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗುತ್ತಿತ್ತು.<br>ಜಿ.ಎಸ್.ಟಿ ಜಾರಿಗೆ ಬಂದ ದಿನದಿಂದ ಮೇಲಿನ ಸೌಲಭ್ಯ ಸಂಖ್ಯೆ:(3) ಅನ್ವಯವಾಗುವುದಿಲ್ಲ.<br>**ಆ) ಕೇಂದ್ರ ಸರ್ಕಾರದ ಸೌಲಭ್ಯಗಳು:**<br>1. ಕೇಂದ್ರ ಸರ್ಕಾರದಿಂದ ಸೌರ ನೀತಿಯ ಪ್ರಕಾರ ಗ್ರಿಡ್ ಸಂಪರ್ಕಿತ ಸೋಲಾರ್ ಯೋಜನೆಗಳಿಗೆ ಜಿ.ಎಸ್.ಟಿ ಜಾರಿಗೆ ಬರುವ ಮೊದಲು excise ಸುಂಕದಿಂದ ವಿನಾಯಿತಿ ನೀಡಲಾಗುತ್ತಿತ್ತು.<br>2. ಸೋಲಾರ್ ಆಯ್ದ ಉಪಕರಣಗಳಿಗೆ customs ಸುಂಕ ವಿನಾಯಿತಿಯನ್ನು ನಿಯಮಗಳ ಪ್ರಕಾರ ಒದಗಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುವುದು.<br>ಜಿ.ಎಸ್.ಟಿ ಜಾರಿಗೆ ಬಂದ ದಿನದಿಂದ ಮೇಲಿನ ಸೌಲಭ್ಯ ಸಂಖ್ಯೆ: (2) ಅನ್ವಯವಾಗುವುದಿಲ್ಲ.<br>ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್ ಅಳವಡಿಸುವ ಯೋಜನೆಯು 2015 ರಿಂದ ಜಾರಿಗೆ ಬಂದಿರುತ್ತದೆ. ಸದರಿ ಯೋಜನೆಯಡಿ ಫಲಾನುಭವಿಗಳಿಂದ ರೂ. 1.00 ಲಕ್ಷ ವಂತಿಗೆಯನ್ನು ಪಡೆದು, ಇನ್ನುಳಿದ ಮೊತ್ತವನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರದ ವತಿಯಿಂದ ಭರಿಸಿ ಹಾಗೂ ಪರಿಶಿಷ್ಟ ಜಾತಿ/ಪಂಗಡದ ಫಲಾನುಭವಿಗಳಿಗೆ ಯೋಜನೆಯನ್ನು ಉಚಿತವಾಗಿ ಅನುಷ್ಠಾನಗೊಳಿಸಲಾಗುತ್ತಿದೆ. |
| ಇ | ಶಿವಮೊಗ್ಗ ಮತ್ತು ದಾವಣಗೆರೆ ಜಿಲ್ಲೆಯ ಹೊನ್ನಾಳಿ ಹಾಗೂ ಚನ್ನಗಿರಿ ತಾಲ್ಲೂಕುಗಳಲ್ಲಿ ಎಷ್ಟು ಜನ ರೈತರಿಗೆ ಈ ಯೋಜನೆಯು ಸೌಲಭ್ಯಗಳನ್ನು ಒದಗಿಸಲಾಗಿದೆ; ಈವರೆಗೆ ಎಷ್ಟು ಪ್ರಮಾಣದ ವಿದ್ಯುತ್ ಉತ್ಪಾದಿಸಲಾಗಿದೆ, ಸರ್ಕಾರವು ಯಾವ ದರದಲ್ಲಿ ವಿದ್ಯುತ್ ಖರೀದಿಸುತ್ತಿದೆ; (ತಾಲ್ಲೂಕುವಾರು ವಿವರ ನೀಡುವುದು) | ಭೂಮಾಲಿಕತ್ವ ರೈತರ ಯೋಜನೆ ಅಡಿಯಲ್ಲಿ ಹೊನ್ನಾಳಿ ತಾಲ್ಲೂಕಿನಲ್ಲಿ ಒಟ್ಟು 6 ಮೆ.ವ್ಯಾ ಸಾಮರ್ಥ್ಯದ 3 ಸೌರ ಘಟಕಗಳನ್ನು ಹಂಚಿಕೆ ಮಾಡಲಾಗಿದ್ದು 2 ಮೆ.ವ್ಯಾ ಸಾಮರ್ಥ್ಯದ 1 ಘಟಕವು ಅನುಷ್ಠಾನಗೊಂಡಿರುತ್ತದೆ. ಕ್ರೆಡಲ್‌ನಿಂದ ನೀಡಿದ ಹಂಚಿಕೆ ಪತ್ರದಲ್ಲಿರುವಂತೆ ವಿದ್ಯುತ್ ಖರೀದಿ ದರವನ್ನು **ಅನುಬಂಧದಲ್ಲಿ** ನೀಡಲಾಗಿದೆ. ಮುಂದುವರೆದು, ಸದರಿ ಯೋಜನೆಯಡಿ ಚನ್ನಗಿರಿ ತಾಲ್ಲೂಕಿನಲ್ಲಿ ಯಾವುದೇ ಘಟಕಗಳನ್ನು ಹಂಚಿಕೆ ಮಾಡಿರುವುದಿಲ್ಲ. ವಿದ್ಯುತ್ ಉತ್ಪಾದನಾ ವಿವರವನ್ನು ಸಂಬಂಧಿಸಿದ ಎಸ್ಕಾಂನಿಂದ ಪಡೆಯಬಹುದಾಗಿದೆ.<br>ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್ ಯೋಜನೆಗೆ ಸಂಬಂಧಿಸಿದಂತೆ ಹೊನ್ನಾಳಿ ತಾಲ್ಲೂಕಿನಲ್ಲಿ 1 ಸಂಖ್ಯೆ ಹಾಗೂ ಚನ್ನಗಿರಿ ತಾಲ್ಲೂಕಿನಲ್ಲಿ 17 ಸಂಖ್ಯೆಯ 5 ಹೆಚ್.ಪಿ ಸಾಮರ್ಥ್ಯದ ಸೋಲಾರ್ ಪಂಪ್‌ಸೆಟ್‌ಗಳನ್ನು ಅಳವಡಿಸಲಾಗಿರುತ್ತದೆ. ಸದರಿ ಯೋಜನೆಯು ಜಾಲಮುಕ್ತವಾಗಿರುತ್ತದೆ. |
| ಈ | ಈ ಯೋಜನೆಗೆ ಕೇಂದ್ರ ಸರ್ಕಾರವು ಸಹಾಯಧನ ನೀಡಲಿದೆಯೇ; ಎಷ್ಟು ಪ್ರಮಾಣದ ಸಹಾಯಧನ ನೀಡುತ್ತದೆ? | ಭೂಮಾಲಿಕತ್ವ ರೈತರ ಯೋಜನೆ ಅಡಿಯಲ್ಲಿ ಹಂಚಿಕೆ ಮಾಡಿದ ಸೌರ ಘಟಕಗಳಿಗೆ ಕೇಂದ್ರ ಸರ್ಕಾರದಿಂದ ಯಾವದೇ ಸಹಾಯಧನ ನೀಡಲಾಗುವುದಿಲ್ಲ.<br>ಸೌರಶಕ್ತಿ ಆಧಾರಿತ ಜಾಲಮುಕ್ತ ನೀರಾವರಿ ಪಂಪ್‌ಸೆಟ್ ಯೋಜನೆಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದ ನವ ಮತ್ತು ನವೀಕರಿಸಬಹುದಾದ ಇಂಧನ ಸಚಿವಾಲಯದಿಂದ ರಾಜ್ಯದ ರೈತ ಫಲಾನುಭವಿಗಳ ಜಮೀನುಗಳಿಗೆ ಸೌರಶಕ್ತಿ ಆಧಾರಿತ ನೀರಾವರಿ ಪಂಪ್‌ಸೆಟ್‌ಗಳನ್ನು ಅಳವಡಿಸಲು 2018-19ನೇ ಸಾಲಿನ ಸೌರ ಪಂಪ್‌ಸೆಟ್ ಬೆಂಚ್‌ಮಾರ್ಕ್ ದರಕ್ಕೆ ಶೇ 20 ರಷ್ಟು ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ. |

**ಸಂಖ್ಯೆ: ಎನರ್ಜಿ 64 ಇಬಿಎಸ್ 2019**

**(ಹೆಚ್.ಡಿ.ಕುಮಾರಸ್ವಾಮಿ)**
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ. ಆರ್ ಪ್ರಸನ್ನ ಕುಮಾರ್ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 410 ಕ್ಕೆ ಅನುಬಂಧ

ಭೂಮಾಲೀಕತ್ವವುಳ್ಳ ರೈತರ ಯೋಜನೆಯಡಿಯಲ್ಲಿ ಶಿವಮೊಗ್ಗ ಮತ್ತು ದಾವಣಗೆರೆ ಜಿಲ್ಲೆಯಲ್ಲಿ ಸೋಲಾರ್ ವಿದ್ಯುತ್ ಯೋಜನೆಗಳ ಒಡಂಬಡಿಕೆ ಮಾಡಿಕೊಂಡಿರುವ ವಿವರಗಳು ಕೆಳಕಂಡಂತಿವೆ.

| ಸಂಖ್ಯೆ | ಭೂಮಾಲೀಕತ್ವವುಳ್ಳ ರೈತರ ಹೆಸರು | ಜಿಲ್ಲೆ | ತಾಲ್ಲೂಕು | ಹಂಚಿಕೆ ಸಾಮರ್ಥ್ಯ (ಮೆ.ವ್ಯಾ.ನಲ್ಲಿ) | ಸ್ಥಾಪಿತ ಸಾಮರ್ಥ್ಯ (ಮೆ.ವ್ಯಾ) | ಈವರೆಗಿನ ವಿದ್ಯುತ್ ಉತ್ಪಾದನೆಯ ಪ್ರಮಾಣ (ಎಂ.ಯು) | ಬೆವಿಕಂ ಖರೀದಿಸುತ್ತಿರುವ ವಿದ್ಯುತ್ ದರ ರೂ ಗಳಲ್ಲಿ/(ಯೂನಿಟ್‌ಗೆ) |
|---|---|---|---|---|---|---|---|
| 1 | ಶ್ರೀ ಅಮಾರ್ತ್ಯ ರಾಜಶೇಖರಪ್ಪ (ಶ್ರೀ ಬೊಮ್ಮಪ್ಪ ಕೆಂಚಿಕೊಪ್ಪ) | ದಾವಣಗೆರೆ | ಹೊನ್ನಾಳಿ | 2 | 2 | 4.66 | ರೂ. 4.36 |
| 2 | ಶ್ರೀ ಪಂಚಾಕ್ಷರಯ್ಯ | ಶಿವಮೊಗ್ಗ | ಸೊರಬ | 1 | 1 | 3.12 | ರೂ.6.51 |
| 3 | ಶ್ರೀಮತಿ. ಜ್ಯೋತಿ ಚೌಹಾಣ್ | ದಾವಣಗೆರೆ | ಹೊನ್ನಾಳಿ | 2 | ಈವರೆಗೆ ಅನುಷ್ಠಾನಗೊಂಡಿರುವುದಿಲ್ಲ. | | |
| 4 | ಶ್ರೀ ಎಮ್. ಆರ್. ಚೌಹಾಣ್ | ದಾವಣಗೆರೆ | ಹೊನ್ನಾಳಿ | 2 | | | |